# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1310 |
| ಸದಸ್ಯರ ಹೆಸರು | ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 24-12-2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರೈತ ಉತ್ಪಾದನಾ ಸಂಸ್ಥೆಗಳ ರಚನೆಗೆ ಸರ್ಕಾರದಿಂದ ಹೊರಡಿಸಲಾದ ಮಾರ್ಗಸೂಚಿಗಳು ಯಾವುವು; ಈ ರೈತ ಉತ್ಪಾದನಾ ಸಂಸ್ಥೆಗಳಿಗೆ ಸರ್ಕಾರದಿಂದ ದೊರಕುವ ಸವಲತ್ತುಗಳು ಯಾವುವು; ರೈತ ಉತ್ಪಾದನಾ ಸಂಸ್ಥೆಗಳನ್ನು ಸಶಕ್ತಗೊಳಿಸಲು ಇಲಾಖೆಯ ಕಾರ್ಯಕ್ರಮಗಳು ಯಾವುವು; ರಾಜ್ಯದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ರೈತ ಉತ್ಪಾದನಾ ಸಂಸ್ಥೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿಯನ್ನು ಒದಗಿಸುವುದು) | ರಾಜ್ಯ ಸರ್ಕಾರವು ರೈತ ಉತ್ಪಾದಕರ ಸಂಸ್ಥೆಗಳ ರಚನೆಗೆ ಕರ್ನಾಟಕ ರಾಜ್ಯ ರೈತ ಉತ್ಪಾದಕರ ಸಂಸ್ಥೆಗಳ ನೀತಿ-2018 ನ್ನು ಜಾರಿಗೆ ತಂದಿರುತ್ತದೆ ಹಾಗೂ ಮಾರ್ಗಸೂಚಿಯನ್ನು ಹೊರಡಿಸಲಾಗಿರುತ್ತದೆ.<br><br>ಕೇಂದ್ರ ಸರ್ಕಾರವು 10,000 ರೈತ ಉತ್ಪಾದಕರ ಸಂಸ್ಥೆಗಳ ರಚನೆ ಮತ್ತು ಉತ್ತೇಜನಕ್ಕೆ ಅನುಷ್ಠಾನ ಮಾರ್ಗಸೂಚಿಯನ್ನು ಹೊರಡಿಸಲಾಗಿರುತ್ತದೆ.<br><br>ರೈತ ಉತ್ಪಾದಕರ ಸಂಸ್ಥೆಗಳನ್ನು ಸಶಕ್ತಗೊಳಿಸಲು ಇಲಾಖೆಯು ಪ್ರಸ್ತುತ ರಾಜ್ಯ ನೀತಿಯನ್ವಯ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ 130 ರೈತ ಉತ್ಪಾದಕರ ಸಂಸ್ಥೆಗಳನ್ನು ಮತ್ತು ಕೇಂದ್ರ ಪುರಸ್ಕೃತ 10,000 ರೈತ ಉತ್ಪಾದಕರ ರಚನೆ ಮತ್ತು ಉತ್ತೇಜನ ಯೋಜನೆಯಡಿ 100 ರೈತ ಉತ್ಪಾದಕರ ಸಂಸ್ಥೆಗಳನ್ನು ರಚಿಸಿ ಉತ್ತೇಜಿಸಲಾಗುತ್ತಿದೆ.<br><br>ಮುಂದುವರೆದು, ಸನ್ಮಾನ್ಯ ಮುಖ್ಯಮಂತ್ರಿಯವರು 2021ನೇ ಸಾಲಿನ ಸ್ವಾತಂತ್ರ್ಯ ದಿನಾಚರಣೆಯ ಭಾಷಣದಲ್ಲಿ ರೈತ/ಮೀನುಗಾರರ/ ನೇಕಾರರನ್ನು ಸಂಘಟಿಸಿ 750 ಅಮೃತ ಉತ್ಪಾದಕರ ಸಂಸ್ಥೆಗಳನ್ನು ರಚಿಸುವುದಾಗಿ ಘೋಷಿಸಿದ ಹಿನ್ನೆಲೆಯಲ್ಲಿ ಜಲಾನಯನ ಅಭಿವೃದ್ಧಿ ಇಲಾಖೆಯಿಂದ 210 ಹಾಗೂ ರೇಷ್ಮೆ, ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಕೆ ಮತ್ತು ಕೈಮಗ್ಗ ಹಾಗೂ ಜವಳಿ ಇಲಾಖೆಗಳಿಂದ 540 ಅಮೃತ ರೈತ ಉತ್ಪಾದಕರ ಸಂಸ್ಥೆಗಳನ್ನು ರಚಿಸಿ ಉತ್ತೇಜಿಸಲು ಗುರಿಯನ್ನು ಹೊಂದಲಾಗಿದೆ.<br><br>ಜಲಾನಯನ ಅಭಿವೃದ್ಧಿ ಇಲಾಖೆ ವತಿಯಿಂದ ರಚಿಸಿ ಉತ್ತೇಜಿಸುತ್ತಿರುವ ಹಾಗೂ ಪ್ರಸ್ತುತ ಅಸ್ತಿತ್ವದಲ್ಲಿರುವ ಒಟ್ಟು 242 ರೈತ ಉತ್ಪಾದಕರ ಸಂಸ್ಥೆಗಳ ಜಿಲ್ಲಾವಾರು ಸಂಖ್ಯೆಯ ವಿವರವನ್ನು ಅನುಬಂಧದ-1ರಲ್ಲಿ ಒದಗಿಸಿದೆ. |